# ಪಿಪ್ರಾ : ೧೪ ಜನ ದಲಿತರ ಜೀವಂತ ದಹನ

ನ್ಯಾಯಬದ್ಧ ಕೂಲಿ ಕೇಳಿದ್ದಕ್ಕಾಗಿ 42 ಮಂದಿ ದಲಿತರನ್ನು ಸಜೀವ ದಹನಮಾಡಿದ ತಮಿಳುನಾಡಿನ ಕಿಲ್ವವಣಿ, ಬಿಹಾರದ ಬೆಲ್ಚಿ ಮತ್ತು ಪಾರಸ್‌ಬಿಘಾ ಅಮಾನುಷ ಕಗ್ಗೊಲೆ ಇನ್ನೂ ಹಚ್ಚಹಸುರಾಗೇ ಇರುವಾಗಲೇ ಪಟ್ನಾ ಜಿಲ್ಲೆಯ ಪಿಪ್ರಾ ಗ್ರಾಮದ 14 ಮಂದಿ ದಲಿತರನ್ನು ಗುಂಡಿಕ್ಕಿ-ಸಜೀವ ದಹನ ಮಾಡಲಾಗಿದೆ. ಎಡಬಿಡದೆ ನಡೆಯುತ್ತಿರುವ ದಲಿತರ ಸಜೀವ ದಹನದಿಂದ ಹೆಣಗಳ ವಾಸನೆ ಮತ್ತೆ ದೇಶವನ್ನು ಸುತ್ತುವರಿದಿದೆ.

ಇಡೀ ಕುಟುಂಬವನ್ನೇ ಕಳೆದುಕೊಂಡು ಸಾವಿನಿಂದ ಪಾರಾಗಿರುವ ಕೃಷ್ಣ ಹೇಳುತ್ತಾನೆ ಮುಂಬರುವ ಹೋಳಿಹಬ್ಬಕ್ಕಾಗಿ ಮನೆ ಮಂದಿಗೆಲ್ಲ ಹೊಸಬಟ್ಟೆ ಹೊಲಿಸಿ ತಂದಿಟ್ಟಿದೆ. ಆಗತಾನೆ ಎಲ್ಲರೂ ಬಟ್ಟೆಗಳನ್ನು ನೋಡಿ ಸಂತೋಷಪಟ್ಟಿದ್ದರು, ಕೂಲಿ ಹಣವನ್ನು ಉಳಿಸಿ ಹಬ್ಬಕ್ಕೆಂದು ಹೆಚ್ಚು ಗೋಧಿಯನ್ನು ತಂದಿದ್ದೆ. ಸುಮಾರು 10 ಗಂಟೆ ಸಮಯ ಊಟ ಮಾಡಿ ಮಲಗಿದೆವು. ಆಗತಾನೆ ನಿದ್ದೆ ಬರತೊಡಗಿತ್ತು. ಅಷ್ಟರಲ್ಲಿ ಹೊರಗಿನಿಂದ ಗುಂಪೊಂದು ಕದ ಬಡಿಯಿತು. "ಬಾಗಿಲು ತಗೆ ಇಲ್ಲದಿದ್ದರೆ ಮುಗಿಸುಬಿಡುತ್ತೇವೆ" ಎನ್ನುತ್ತಿದ್ದರು. ತಡವರಿಸಿಎದ್ದ ನಾನು ಒಂದು ಮೂಲೆಲಿ ಅವಿತಾ



(2ನೇ ಪುಟ ನೋಡಿ)


# ಪಂಚಮ


ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ. ಲೇಖನ-ಸುದ್ದಿ ಕಳುಹಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ.


ಸಂಪುಟ : 4 ಸಂಚಿಕೆ : 4-5, 5, ಮಾರ್ಚ್ 1980 ಪಾಕ್ಷಿಕ ಬೆಲೆ : 20 ಪೈಸೆ ವಾರ್ಷಿಕ ಚಂದಾ 5 ರೂ. ಗಳು


## ಪಾರಸ್ ಬಿಘಾ ಹತ್ಯಾಕಾಂಡ

ಪಶ್ಚಿಮ ಜೆಹನಾಬಾಹ್-ಗಯಾ ರಸ್ತೆಯ ಮಗ್ಗುಲಲ್ಲಿರುವ ಪಾರಸ್‌ಬಿಘಾ ಜಂಪುಹಿಡಿದ ಒಂದು ಕುಗ್ರಾಮ. ಕಳೆದ ಕೆಲವು ವರ್ಷಗಳಿಂದಲೂ ಬಡವರು ಮತ್ತು ಶ್ರೀಮಂತರ ನಡುವೆ ಘರ್ಷಣೆ-ವೈಷಮ್ಯ ಹೊತ್ತಿ ಉರಿಯುತ್ತಿದ್ದು ಫೆಬ್ರುವರಿ 6 ರಂದು 12 ಮಂದಿ ಹಿಂದುಳಿದವರ ಕಗ್ಗೊಲೆ ಮಾಡಲಾಗಿದೆ. ಜಾತಿ ಮೆರಗು ದಡೆದ ಈ ಘರ್ಷಣೆಯಿಂದಾಗಿ ಬಿಹಾರ ಈಗ ಬೆಂಕಿಯಾಗಿದೆ. ಈಗಾಗಲೇ ದ್ವೇಷದ ಕಿಡಿ ದೋಹಿಯಾ ಮತ್ತು ಸರ್ತುವಾ ಗ್ರಾಮಗಳಲ್ಲೂ ಹೊತ್ತಿಕೊಂಡು ಹತ್ತಿರದ ಹಳ್ಳಿಗಳಲ್ಲೂ ಹೊಗೆಯಾಡುತ್ತಿದೆ.

ಪಾರಸ್‌ಬಿಘಾದ ಬೀಭತ್ಸ ಘಟನೆಯನ್ನು ವರ್ಣಿಸಲು ಅಸಾಧ್ಯವೆನಿಸುವಂತಹದ್ದು. ಫೆಬ್ರುವರಿ ಆರರಂದು ನಡುರಾತ್ರಿ ಇಡೀ ಗ್ರಾಮವೇ ನಿದ್ರಾವಸ್ಥೆಯಲ್ಲಿದ್ದಾಗ ಸುಸಜ್ಜಿತ ಸಶಸ್ತ್ರ ಧಾರಿಗಳ ಗುಂಪೊಂದು ಊರನ್ನು ಸುತ್ತುವರಿದು ಗುಡಿಸಲುಗಳಿಗೆ ಬೀಗ ಜಡಿದು ಸೀಮೆಎಣ್ಣೆ ಮತ್ತು ಪೆಟ್ರೋಲ್ ಎರಚಿ ಬೆಂಕಿ ಇಟ್ಟಿತು. ದಿಗ್ಗನೆ ಹೊತ್ತಿಗೊಂಡ ಬೆಂಕಿಯಿಂದ ನಿದ್ರೆ

(ಮಧ್ಯದ ಪುಟ ನೋಡಿ)

## ದಲಿತ ನುಡಿ

ನಾವು ಮಾರ್ಕ್ಸ್‌ವಾದದಲ್ಲಿನ ಕೊರತೆಗಳನ್ನು ನಿವಾರಿಸಿಕೊಂಡು ಅಂಬೇಡ್ಕರ್ ಸೂಚಿಸಿದ ಸರ್ವಮಾನವ ಸಮತಾ ಸಮಾಜವನ್ನು ಸ್ಥಾಪಿಸಬೇಕಾಗಿದೆ.

—ಬೋಯಿ ಭೀಮಣ್ಣ

---

## ಪಿಪ್ರಾ ಬಿಟ್ಟು ಅನೇಕ ಕಡೆ ಫೆಬ್ರುವರಿ ಕೊನೆವಾರ ನಾಲ್ವರು ದಲಿತರ ಕೊಲೆ

ಕಳೆದ ಫೆಬ್ರುವರಿ ಕೊನೆವಾರದಲ್ಲಿ ಪಿಪ್ರಾದ ಸಾಮೂಹಿಕ ಕಗ್ಗೊಲೆ ಬಿಟ್ಟು ಇತರೆ ಮೂರು ರಾಜ್ಯಗಳಲ್ಲಿ ನಾಲ್ವರು ದಲಿತರ ಹತ್ಯೆ ನಡೆದಿರುವುದು ಅಧಿಕೃತವಾಗಿ ಬೆಳಕಿಗೆ ಬಂದಿದೆ.

25ರಂದು ತಮಿಳುನಾಡಿನ ಸಾತನೂರು ಗ್ರಾಮದಲ್ಲಿ ಸವರ್ಣೀಯರೊಡನೆ ನಡೆದ ಘರ್ಷಣೆಯಲ್ಲಿ ಒಬ್ಬ ಸತ್ತ. ರಾಜಸ್ಥಾನದ ಕುರ್ನಾಹ ಗ್ರಾಮದಲ್ಲಿ 27ರಂದು ಮತ್ತು ಪಂಜಾಬಿನ ಫುಲ್ಲಾರ್ ಎಂಬಲ್ಲಿ 28ರಂದು ರಾತ್ರಿ ಭೂಮಾಲೀಕರು ಗುಂಡಿಟ್ಟು ಕೊಂದಿದ್ದಾರೆ.

## ಪಿಪ್ರಾ ಕಗ್ಗೊಲೆಗೆ ದ. ಸಂ. ಸ. ಖಂಡನೆ

ಪಾರಸ್‌ಬಿಘಾ ಮತ್ತು ಪಿಪ್ರಾದಲ್ಲಿ ಹಿಂದುಳಿದ ಹಾಗೂ ದಲಿತವರ್ಗಗಳ ಜನರನ್ನು ಜೀವಂತವಾಗಿ ಸುಟ್ಟ ಭೂಮಾಲೀಕರ ಅಮಾನುಷ ಕೃತ್ಯವನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿ ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪ ಅವರು ತೀವ್ರವಾಗಿ ಖಂಡಿಸಿದ್ದಾರೆ.

ದಲಿತರ ಪ್ರಾಣರಕ್ಷಣೆ ಮಾಡುವಲ್ಲಿ ವಿಫಲಗೊಂಡಿರುವ ಸರ್ಕಾರಗಳನ್ನು ಖಂಡಿಸಿರುವ ಅವರು ಭೂಮಾಲೀಕರ ಬಳಿ ಇರುವ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಳ್ಳಬೇಕೆಂದು ಮತ್ತು ಖಾಸಗಿ ಆಸ್ತಿ ಹಕ್ಕನ್ನು ರದ್ದುಗೊಳಿಸಬೇಕೆಂದು ಕೇಂದ್ರ ಸರ್ಕಾರವನ್ನು ಒತ್ತಾಯಿಸಿದ್ದಾರೆ.

# ಪಿಪ್ರಾ ದಲಿತರ ಜೀವಂತ ದಹನ

[ಒಂದನೇ ಪುಟದಿಂದ]

ಕೊಳ್ಳಲು ಹೆಂಡತಿ, ಮಕ್ಕಳಿಗೆ ತಿಳಿಸಿ ಹಿಂದಿನ ಬಾಗಿಲಿಂದ ಹೊರಗೆ ಓಡಿದೆ. ಅಷ್ಟರಲ್ಲಿ ಶಸ್ತ್ರ ಸಜ್ಜಿತ ಗುಂಪು ಬಾಗಿಲು ಮುರಿದು ಒಳಗೆ ಪ್ರವೇಶಿಸಿ ಮನೆಮಂದಿಯನ್ನೆಲ್ಲ ಕೊಂದು ಗುಡಿಸಲಿಗೆ ಬೆಂಕಿ ಹಚ್ಚಿತು.

ಕೃಷ್ಣ ಈಗ ತನ್ನ ವೃದ್ಧತಾಯಿ. ಪತ್ನಿ, ಹಿರಿಯಣ್ಣನ ಹೆಂಡತಿ, ಆತನ ಮೂರು ಗಂಡು ಮಕ್ಕಳು, ಮಗಳು, ಬಾವ್ಮೈದ, ನಾದಿನಿ ಮತ್ತು ಎರಡು ವರ್ಷದ ಮಗನೊಬ್ಬನನ್ನು ಕಳೆದುಕೊಂಡಿದ್ದಾನೆ. ಈ ನತದೃಷ್ಟರೆಲ್ಲ ಗುಂಡೇಟಿಗೆ ಅಥವಾ ಸಜೀವ ದಹನವಾಗಿ ಸತ್ತಿದ್ದಾರೆ. ಎರಡು ವರ್ಷದ ಹಸುಳೆ ಸಂಜಯ್‌ನನ್ನು ಗುಂಡಿಕ್ಕಿಕೊಂದು ಬೆಂಕಿಗೆ ಎಸೆಯಲಾಯಿತು.

ಪೂನ್‌ಪೂನ್ ಪೋಲೀಸ್‌ಠಾಣೆ ವ್ಯಾಪ್ತಿಗೆ ಸೇರಿದ ಪಿಪ್ರಾ ಗ್ರಾಮದ ಮೇಲೆ ಶಸ್ತ್ರ ಸಜ್ಜಿತ ಸುಮಾರು 500ಮಂದಿ ಗುಂಪು ಫೆಬ್ರುವರಿ 25ರಂದು ರಾತ್ರಿ 10 ಗಂಟೆಯಿಂದ ಬೆ. 3-40 ಗಂಟೆವರೆಗೆ ನಡೆಸಿದ ಅಮಾನುಷ ಹಿಂಸಾಚಾರದಲ್ಲಿ ಸತ್ತ 14 ಮಂದಿಯಲ್ಲಿ ಅರ್ಧಂಬರ್ಧ ಹೆಂಗಸರು ಮತ್ತು ಹಸುಳೆಗಳು ಸೇರಿದ್ದಾರೆ.

ಕುರ್ಮಿ ಜಾತಿಗೆ ಸೇರಿದ ಭೂಮಾಲೀಕರ ಶಸ್ತ್ರ ಸಜ್ಜಿತ ಗುಂಪು 30 ಗುಡಿಸಲುಗಳಿದ್ದ ಚಮ್ಮಾರ್ ಕೇರಿಗೆ ದಾಳಿ ನಡೆಸಿ 27 ಗುಡಿಸಲುಗಳನ್ನು ಸಂಪೂರ್ಣವಾಗಿ ಭಸ್ಮಮಾಡಿದೆ.

ದಿನವಿಡೀ ದುಡಿಮೆಗೆ ಒಂದು ಕೆ. ಜಿ. ಧಾನ್ಯ ನೀಡುತ್ತಿದ್ದುದನ್ನು ವಿರೋಧಿಸಿ ಸರ್ಕಾರ ಜಾರಿಗೊಳಿಸಿದಂತೆ ಕನಿಷ್ಠ ಐದು ರೂಪಾಯಿ 50 ಪೈಸೆ ಕೂಲಿ ನೀಡಬೇಕೆಂದು ಭೂಮಾಲೀಕ ಭೋಲಾಸಿಂಗನ ಜಮೀನಿನಲ್ಲಿ ಕೆಲಸ ಮಾಡಲು ನಿರಾಕರಿಸಿದ್ದೇ ಈ ಕಗ್ಗೊಲೆಗೆ ಕಾರಣ.

ಪಿಪ್ರಾ ಬಳಿಯ ಕಲ್ಯಾಣ್ ಚಕ್ ಗ್ರಾಮದ ಕುರ್ಮಿ ಜಾತಿಗೆ ಸೇರಿದ ಭೂಮಾಲೀಕ ಭೋಲಾಸಿಂಗ್ ಕಳೆದ ಡಿಸೆಂಬರ್‌ನಲ್ಲಿ ಕೊಲೆಯಾದ. ಭೋಲಾಸಿಂಗ್‌ನ ಕೊಲೆಯ ಪ್ರತೀಕಾರವಾಗಿ ಪಿಪ್ರಾ ಘಟನೆ ನಡೆದಿದೆ ಎಂದೂ ಸುದ್ದಿ ಹಬ್ಬಿದೆ. ಈಗ ಕಟ್ಟಲಾಗುತ್ತಿರುವ ಮನೆಯೊಂದರ ಒಳಗೆ ಗ್ರಾಮದ ಜನರೆಲ್ಲ ಸೇರಿಕೊಳ್ಳದಿದ್ದರೆ ಎಲ್ಲರೂ ಕೊಲೆಯಾಗಬೇಕಾಗಿತ್ತು. ಆ ಮನೆಯಲ್ಲಿ ಹೆಂಗಸರು, ಗಂಡಸರು ಮತ್ತು ಮಕ್ಕಳು ಸೇರಿದಂತೆ ಸುಮಾರು 40 ಮಂದಿ ಸೇರಿದ್ದರು. ಶತ್ರುಗಳು ಹೊಡೆಯುತ್ತಿದ್ದ ಗುಂಡೇಟಿಗೆ ನಾವು ಪ್ರತಿಯಾಗಿ ಕಲ್ಲು ಇಟ್ಟಿಗೆ ಚೂರುಗಳನ್ನೂ ತೂರುತ್ತಿದ್ದರು. ಹೀಗೆ ನಡೆದ ನೇರ ಹೋರಾಟ ಮುಂಜಾನೆ ಸುಮಾರು 3-30 ಗಂಟೆ ವರೆಗೆ ಮುಂದುವರಿಯಿತು. ಅಷ್ಟರಲ್ಲಿ ನಮ್ಮ ಗುಡಿಸಲುಗಳೆಲ್ಲ ಪೂರ್ಣ ಭಸ್ಮವಾಗಿದ್ದವು. ಬೆಂಕಿಗೆ ಸಿಕ್ಕ ಜನರು ಮತ್ತು ದನ-ಎಮ್ಮೆಗಳ ಆಕ್ರಂದನ ಕರುಳು ಕಿತ್ತುಬರುತ್ತಿತ್ತು ಎಂದು ಬುದಿಯಾ ದೇವಿ ಎಂಬ ತನ್ನ ಪತ್ನಿ ಕಳೆದುಕೊಂಡ ದುಃಖತಪ್ತ ರವಿದಾಸ್ ಹೇಳುತ್ತಾನೆ.

ಪಿಪ್ರಾ ಗ್ರಾಮಕ್ಕೆ ಪತ್ರಕರ್ತರು ಭೇಟಿ ಇತ್ತಾಗ ಭಸ್ಮವಾಗಿ ಹೋಗಿ ಅವಶೇಷವಾಗಿ ನಿಂತಿರುವ ಬರೇ ಗೋಡೆಗಳ ಮನೆಗಳಲ್ಲಿ ಚೆಲ್ಲಿದ ಹೆಪ್ಪುಗಟ್ಟಿರುವ ರಕ್ತದ ಕಲೆಗಳು. ಅಲ್ಲಲ್ಲಿ ಕರಕಲಾಗಿ ಮತ್ತು ಬೂದಿಯಾಗಿ ಬಿದ್ದಿದ್ದ ಮೂಳೆ ಚೂರುಗಳು ತಮ್ಮದೇ ಆದ ದುರಂತ ಕತೆಗಳನ್ನು ಹೇಳುವಂತಿದ್ದುದ್ದು ಕಂಡು ಬಂದಿತು.

ಹತ್ಯಾಕಾಂಡ ನಡೆದ ಸ್ಥಳದಲ್ಲಿ ಈಗ ಸುಮಾರು 50 ಸಿಡಿದ ಗುಂಡುಗಳು ದೊರೆತಿದ್ದು ಅವೆಲ್ಲ 303ನೇ ರೈಫಲ್‌ಗಳಿಗೆ ಬಳಸುವ ಗುಂಡುಗಳಾಗಿವೆ.

ಹತ್ತಿರ ಗ್ರಾಮದ ಚೌಕಿದಾರ ಹತ್ತಿ ಉರಿಯುತ್ತಿದ್ದ ಪಿಪ್ರಾ ಬೆಂಕಿಕಂಡು ರಾತ್ರಿ 2 ಗಂಟೆಯಲ್ಲಿ ಪೂನ್ ಪೂನ್ ಪೋಲೀಸ್ ಠಾಣೆಗೆ ಸುದ್ದಿ ಮುಟ್ಟಿಸಿದರೂ, ಕೇವಲ ಐದಾರು ಮಂದಿ ಪೋಲೀಸರೊಡನೆ ಪೋಲೀಸ್ ಅಧಿಕಾರಿಯೊಬ್ಬ ಜೀಪ್‌ವೊಂದರಲ್ಲಿ ಹೊರಟು ಮಧ್ಯದಾರಿಯಲ್ಲಿ ಜೀಪ್ ಕೆಟ್ಟಿತೆಂದು 3-30 ಗಂಟೆಗೆ ಪಿಪ್ರಾ ತಲುಪುವಷ್ಟರಲ್ಲಿ ಶಸ್ತ್ರ ಸಜ್ಜಿತ ಭೂಮಾಲೀಕರ ಗುಂಪು ಇಡೀ ಗ್ರಾಮವನ್ನು ರುದ್ರಭೂಮಿಯನ್ನಾಗಿ ಮಾಡಿ ಹೋಗಿತ್ತು.

# ಭೂಮಾಲೀಕನಿಂದ ದಲಿತರ ಇನಾಂ ಜಮೀನು ಅಕ್ರಮ

ವರದಿ : ಎಂ. ಡಿ. ಹನುಮಂತರಾಯಪ್ಪ

ಸರ್ಕಾರದ ಇನಾಂತಿಯಿಂದ ದೊರೆತ ಜಮೀನು ದಲಿತರಿಗೆ ಅದನ್ನು ಲಪಟಾಯಿಸಿಕೊಳ್ಳು ವವರಿಗೆ ಕಠಿಣ ಶಿಕ್ಷೆ ಮತ್ತು ಯಾವುದೇ ಸಂಧಾನ ಮಾಡಿಕೊಂಡು ಜಮೀನನ್ನು ಇತರರು ತಮ್ಮ ಹೆಸರಿಗೆ ಪರಭಾರೆ ಮಾಡಿಸಿಕೊಳ್ಳಲು ಅವಕಾಶ ವಿಲ್ಲ. ಒಂದು ವೇಳೆ ಹಾಗಾಗಿದ್ದರೆ ಅದು ಅನೂರ್ಜಿತ ಎಂಬ ಸರ್ಕಾರದ ಬಾಯುಪಚಾರದ ಕಾನೂನು ಪಾವಗಡ ತಾಲ್ಲೂಕಿನಲ್ಲಿ ಸುಳ್ಳಾಗಿದೆ. ಪಾವಗಡ ತಾಲ್ಲೂಕು ನಾಗಲಪುರದ ನಿಂಗಪ್ಪ ಎಂಬ ದಲಿತನಿಗೆ ಇನಾಂತಿಯಿಂದ ದೂರೆತ ಸರ್ವೇ ನಂ. 105 ರಲ್ಲಿ 5ಎಕರೆ ನೀರಾವರಿ ಜಮೀನು ಸಿಕ್ಕಿದ್ದು ಅತನ ಮಗ ಗಂಗಪ್ಪ ಮತ್ತು ದತ್ತು ಪುತ್ರ ಸಿದ್ದಪ್ಪ ಎಂಬುವರಿಗೆ ಜಮೀನು ಹಕ್ಕನ್ನು ನೀಡಲಾಗಿತ್ತು. ನಿಂಗಪ್ಪ ಕುರುಬರ ಮಲ್ಲಪ್ಪ ಎಂಬ ಭೂಮಾಲೀಕನ ಬಳಿ ಕೆಲವು ವರ್ಷಗಳ ಹಿಂದೆ ಕೇವಲ 300 ರೂ ಸಾಲ ತೆಗೆದುಕೊಂಡು ಇನಾಂತಿ ಜಮೀನನ್ನೇ ಬೋಗ್ಯ ಕಾಣಿಸಿದ್ದ. 300ರೂ ಸಾಲ ತೀರಿಸಲು ನಿಂಗಪ್ಪನ ಮಗ ಗಂಗಪ್ಪ ಮತ್ತು ದತ್ತು ಪುತ್ರ ಸಿದ್ದಪ್ಪ ಇಬ್ಬರೂ ಭೂಮಾಲೀಕ ಮಲ್ಲಪ್ಪನ ಮನೆಯಲ್ಲಿ ನಾಲ್ಕು ವರ್ಷ ಸತತವಾಗಿ ಜೀತಮಾಡಿದರು. ಆದರೂ ತನ್ನ ಸಾಲ ತೀರಿಲ್ಲವೆಂದು, ಜಮೀನು ತನ್ನದೇ ಎಂದು ಜಮೀನಿನಲ್ಲಿದ್ದ ಸಿದ್ದಪ್ಪನ ಮನೆಯನ್ನು ಕೆಡವಿ ತಾನೊಂದು ಮನೆಯನ್ನು ಕಟ್ಟಿಕೊಂಡಿದ್ದಾನೆ. ಈ ಮುಂಚೆಸಿದ್ದಪ್ಪನ ಮನೇಗೆತನ್ನ ಗೂಂಡಾಗಳನ್ನ ಮತ್ತು ಬೆಂಬಲಿಗರನ್ನು ನುಗ್ಗಿಸಿ ಜಮೀನಿಗೆ ಸಂಬಂಧಿಸಿದ ದಾಖಲೆ ಪತ್ರಗಳನ್ನೆಲ್ಲ ಮಲ್ಲಪ್ಪ ವಶಪಡಿಸಿಕೊಂಡಿದ್ದಾನೆ. ಕಾನೂನು ಉಲ್ಲಂಘಿಸಿ ದಲಿತರ ಮೇಲೆಭೂಮಾಲೀಕರು ಇಷ್ಟೊಂದು ಹಗಲುದರೋಡೆ ನಡೆಸಿ ಕಿರುಕುಳ ಕೊಡು ತ್ತಿದ್ದರೂ ಸರಕಾರ ಏಕೆ ಸುಮ್ಮನಿದೆಯೋ ತಿಳಿಯದಾಗಿದೆ

## ಪಿರಿಯಾಪಟ್ಟಣ ತಾಲ್ಲೂಕು: ಜೀತಗಾರನ ಮೇಲೆ ಹಲ್ಲೆ

ವರದಿ : ದೊಡ್ಡಣ್ಣ ರಾವಂದೂರು

ಪಿರಿಯಾಪಟ್ಟಣ ತಾಲ್ಲೂಕು ಕೆತ್ತೂರಿನ ಭೂಮಾ ಲೀಕ ಮುದ್ದೇಗೌಡನು ದಲಿತ ಜೀತಗಾರ ಮಂಟ ಯ್ಯನ ಮೇಲೆ ಇತ್ತೀಚೆಗೆ ಅಮಾನುಷ ಹಲ್ಲೆ ನಡೆಸಿದನು.

ಐದುನೂರು ರೂ.ಗಳಿಗೆ ಮುದ್ದೇಗೌಡನ ಮನೆ ಯಲ್ಲಿ ಜೀತಕ್ಕೆ ಸೇರಿದ ಮಂಟಯ್ಯ ತನ್ನ ಗುಡಿ ಸಲು ಬೆಂಕಿಗೆ ಆಹುತಿಯಾದ ಕಾರಣ 15 ದಿನಗಳ ಕಾಲ ಜೀತಕ್ಕೆ ಹೋಗಿರಲಿಲ್ಲ ಗುಡಿಸಲು ಕಟ್ಟಿ ಕೊಳ್ಳಲು ಸಾಲಕ್ಕಾಗಿ ಅಲ್ಲಿ ಇಲ್ಲಿ ಸುತ್ತಾಡುತ್ತಿದ್ದ ಮಂಟಯ್ಯ ಕಳೆದ ಜನವರಿ 30ರಂದು ಕಿತ್ತೂರು ಬಸ್ಸ್ಟ್ಯಾಂಡಿನಲ್ಲಿ ಕೂಳಗೌಡನ ಕಣ್ಣಿಗೆ ಬಿದ್ದ. ಕೂಡಲೆ ಮುದ್ದೇಗೌಡ ಮಂಟಯ್ಯನ ಎದೆ ಪಟ್ಟಿ ಹಿಡಿದು ಹಾಡು ಹಗಲಲ್ಲೇ ಜನ ಜಂಗುಳಿ ಎದುರು "ಜೀತಕ್ಕೆ ಬರ್ದೆ ಕಣ್ತಪ್ಪಿಸಿಕೊಂಡು ತಿರ್ಗ್ತಾ ಇದ್ದೀಯ ಬಡ್ಡೀಮಗ್ನೆ" ಎಂದು ತುಚ್ಛವಾಗಿ ಬೈದು ಸಿಕ್ಕಾಪಟ್ಟೆ ಹೊಡೆದ.

ಬಸ್ಸ್ಟ್ಯಾಂಡಿನಲ್ಲೇ ಇದ್ದ ರಾವಂದೂರು ಅಂಬೇಡ್ಕರ್ ಯುವಕ ಸಂಘದ ಕಾರ್ಯಕರ್ತ ಬಸವಯ್ಯ ಮಂಟಯ್ಯನನ್ನು ಬಿಡಿಸಲು ಹೋದರು ಮುದ್ದೇಗೌಡ ಮತ್ತಷ್ಟು ಸಿಟ್ಟಿಗೆದ್ದು ತನ್ನ ಗೂಂಡಾಗಳಾದ ಮಲ್ಲೇಶ ಸುಬ್ಬಣ್ಣ ಮುಂತಾ ದವರಿಂದ ಬಸವಯ್ಯನಿಗೂ ಹೊಡೆಸಿದ.

"ರಾವಂದೂರು ಮತ್ತು ಕಿತ್ತೂರಿನ ಹರಿಜನ್ರ ಸಿಕ್ಕಿದ ಕಡೆ ಮುಗಿಸ್ತೀವಿ" ಎಂದು ಮುದ್ದೇಗೌಡನ ಕಡೆಯವರು ಈಗ ಬೆದರಿಕೆ ಹಾಕುತ್ತಿದ್ದಾರೆ.

## ಕಳ್ಳತನ ಆರೋಪ ದಲಿತನ ಮೇಲೆ ಹಲ್ಲೆ

ಮುಳಬಾಗಲು ತಾಲ್ಲೂಕು ನೆಲ್ಲೂರು ಗ್ರಾಮದಲ್ಲಿ ಶಾಸ್ತ್ರದಿಂದ ತಿಳಿದುಬಂದ ಕಳ್ಳತನ ಆರೋಪದ ಮೇಲೆ ದಲಿತ ಮುನಿವೆಂಕಟಪ್ಪನಿಗೆ ಸವರ್ಣೀಯ ರಿಬ್ಬರು ಕಾದ ಕಬ್ಬಿಣದ ಸಲಾಕೆಯಿಂದ ಕಾಲಿಗೆ ಬರೆ ಹಾಕಿದ್ದಾರೆ.

ಸವರ್ಣೀಯ ಯಳಚಪ್ಪ ಎಂಬಾತನ ಮನೆಯಲ್ಲಿ ಕಳ್ಳತನ ನಡೆದಿದ್ದು, ಹತ್ತಿರದ ಮದನಪಲ್ಲಿಯಲ್ಲಿ ಶಾಸ್ತ್ರ ಕೇಳಿದಾಗ ಸವರ್ಣೀಯರಿಬ್ಬರು ಸೇರಿ ದಂತೆ ದಲಿತ ಮುನಿವೆಂಕಟಪ್ಪ ಕಳ್ಳತನ ಮಾಡಿರು ವುದಾಗಿ ತಿಳಿದು ಬಂದಿತೆಂದು ಆರೋಪಿಸಲಾಗಿದೆ

ಈ ಸಂಬಂಧದಲ್ಲಿ ಫೆಬ್ರುವರಿ 1ರಂದು ರಾತ್ರಿ ಸವರ್ಣೀಯರು ಪಂಚಾಯಿತಿ ಸಭೆ ಸೇರಿಸಿ ಶಾಸ್ತ್ರದಿಂದ ತಿಳಿದು ಬಂದಿರುವ ಸವರ್ಣೀಯ ರಿಬ್ಬರು ಆರೋಪಿಗಳನ್ನೂ ಬಿಟ್ಟು ಮುನಿವೆಂಕ ಟಪ್ಪನಿಗೆ ಶಿಕ್ಷೆ ವಿಧಿಸಿದರು. ಪಂಚಾಯಿತಿ ಸಭೆ ಯಲ್ಲಿದ್ದ ಸವರ್ಣೀಯರೆಲ್ಲ ಮುನಿವೆಂಕಟಪ್ಪ ನನ್ನು ಹೀನಾಮಾನವಾಗಿ ಬೈದು ಕಾದ ಕಬ್ಬಿಣದ ಸಲಾಕೆಯಿಂದ ಕಾಲಿಗೆ ಬರೆಎಳೆದು ಸಿಕ್ಕಾಪಟ್ಟೆ ಅಮಾನುಷವಾಗಿ ಹೊಡೆದು ಗಾಯಗೊಳಿ ಸಿದ್ದಾರೆ.

## ದಲಿತರ ಮತ್ತೊಂದು ಗ್ರಾಮದ ಮೇಲೆ ಶಸ್ತ್ರದಾಳಿ

ಪಿಪ್ರಾ ಹತ್ಯಾಕಾಂಡದಿಂದ ಪ್ರೇರಿತರಾದ ಭೂಮಾಲೀಕರು ಪಟ್ನಾ ಜಿಲ್ಲೆಯ ಮತ್ತೊಂದು ದಲಿತರ ಗ್ರಾಮ ಅಲಂಗಂಜ್ ಮೇಲೆ ಫೆಬ್ರು ವರಿ 27 ರಂದು ರಾತ್ರಿ ಬಂದೂಕ ಮತ್ತಿರರ ಮಾರಕಾಸ್ತ್ರಗಳಿಂದ ದಲಿತರನ್ನು ಹೊಡೆದು ಅವರು ರಾತ್ರೋರಾತ್ರಿ ಊರುಬಿಟ್ಟು ಹೋಗು ವಂತೆ ಮಾಡಿದ್ದಾರೆ.

ಪಿಪ್ರಾದ ಘೋರ ಅಮಾನುಷ ಕಗ್ಗೊಲೆಯಿಂದ ತತ್ತರಿಸಿ ಜೀವಹಿಡಿದು ರಾತ್ರಿಗಳನ್ನು ತಳ್ಳುತ್ತಿದ್ದ ಅಲಂಗಂಜ್ ದಲಿತರು ಅಂದು ಅನಿರೀಕ್ಷಿತ ದಾಳಿ ಎದುರಿಸಬೇಕಾಯಿತು. ಪ್ರಾಣರಕ್ಷಣೆ ಗಾಗಿ ಹೆಂಗಸು ಮಕ್ಕಳಾದಿಯಾಗಿ ಸಬ್-ಡಿವಿಷ ನಲ್ ಅಧಿಕಾರಿ ಮನೆಯತ್ತ ಧಾವಿಸಿದರು. ನಂತರ ಭಯಗ್ರಸ್ತ ದಲಿತರನ್ನು ಪೋಲೀಸ್ ನೆರವಿನಿಂದ ಅಲಂಗಂಜ್‌ಗೆ ವಾಪಸ್ ಕರೆದು ಕೊಂಡು ಹೋಗಲಾಯಿತೆಂದು ಪೋಲೀಸರು ತಿಳಿಸಿದ್ದಾರೆ.

ಬಹದ್ದೂರ್ ಪೋಲೀಸ್ ಠಾಣೆ ವ್ಯಾಪ್ತಿಗೆ ಸೇರಿದ ಖಿಕ್ಜಾಲಾಲ್ ಗ್ರಾಮದಲ್ಲೂ ಉದ್ರಿಕ್ತ ಪರಿಸ್ಥಿತಿ ಉಂಟಾಗಿದ್ದು ದಲಿತರ ಸ್ಥಿತಿ ಅರಣ್ಯ ರೋಧನವಾಗಿದೆ.

# ರಾಷ್ಟ್ರ ಸಮಾಜವಾದದ ಬಗೆಗೆ ಡಾ|| ಬಿ. ಅ

[ಕಳೆದ ಸಂಚಿಕೆಗಳಿಂದ ಮುಂದುವರೆದುದು]

**ಪ್ರಚುರಪಡಿಸಬೇಕಾದ ಮತ್ತು ತಿಳಿದು ಕೊಳ್ಳಬೇಕಾದ ಕಾರ್ಯಚಟುವಟಿಕೆಗಳು**

ಬಹಳ ಮುಖ್ಯವಾದ ರಾಜಕೀಯ ಚೌಕಟ್ಟು ಮತ್ತು ಆರ್ಥಿಕ ಸಂಗತಿಗಳ ವಿಶ್ಲೇಷಣೆಯಿಂದ ಸ್ಪಷ್ಟವಾಗಿರುವ ಕೆಲವೊಂದು ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳಬಹುದು.

ಶೋಷಕರಿಗೂ ಮತ್ತು ಶೋಷಿತರಿಗೂ ನಡುವೆ ಮೂಲಭೂತವಾದ ದ್ವಂದ್ವಗಳು ಇಲ್ಲಿ ಇರುವವು. ಬೇರೆಯ ಮಾತಿನಲ್ಲಿ ಹೇಳುವುದಾದರೆ ಸಾಮಾಜಿಕ ಉತ್ಪನ್ನಗಳಲ್ಲಿ ಅಲ್ಪಸಂಖ್ಯಾತರು ಬಹುಸಂಖ್ಯಾತರಾದ ಕಾರ್ಮಿಕ ವರ್ಗದವರನ್ನು ಶೋಷಣೆಗೆ ಒಳಗು ಮಾಡುವರು.

**ಎರಡನೆಯದಾಗಿ :**

ಆರ್ಥಿಕ ಚೌಕಟ್ಟಿನ ಒತ್ತಡತೆಯಿಂದಾಗಿ ರಾಜಕೀಯ ಚೌಕಟ್ಟು ಉಂಟಾಗುವುದು. ಮತ್ತೂ ಹೇಳುವುದಾದರೆ ರಾಷ್ಟ್ರ ಶಕ್ತಿಯು ಕೆಲವೆ ಜನ ಬಂಡವಾಳಗಾರರು ಹಾಗೂ ಜಾತಿವಾದಿಗಳ ಕೈಲಿ ಕೇಂದ್ರಿಕೃತವಾಗಿರುವುದು.

**ಮೂರನೆಯದಾಗಿ :**

ಕೆಲವೊಂದು ರಿಯಾಯ್ತಿಗಳೊಂದಿಗೆ ರಾಷ್ಟ್ರಶಕ್ತಿಯು ಎಲ್ಲಾ ಕಾರ್ಯಚಟುವಟಿಕೆಗಳೂ ಕೆಲವೇ ಕೆಲವು ಮಂದಿಯ ಹಿತಕ್ಕಾಗಿ ಮಾತ್ರ ರೂಪಿತವಾದವುಗಳಾಗಿವೆ.

**ಕೊನೆಯದಾಗಿ :**

ಮೂಲಭೂತವಾದ ಹಕ್ಕುಗಳನ್ನು ಕೇವಲ ಬದುಕಿಗಾಗಿ ಬಡಜನತೆ ಬಂಡವಾಳಶಾಹಿಗಳಿಗೆ ಒಪ್ಪಿಸಿಕೊಂಡುಬಿಡುವುದು.

ಡಾ. ಬಿ. ಆರ್ ಅಂಬೇಡ್ಕರ್ ಅವರು ಮೇ ಈ ದ್ವಂದ್ವಗಳಿಗೆ ರಾಷ್ಟ್ರ ಸಮಾಜದ ಜೊ ದಿನ ಸಂವಿಧಾನಾತ್ಮಕ ಪ್ರಜಾಪ್ರಭುತ್ವದ ಕೆಲವು ನಿರ್ಣಾಯಕವಾದ ಪರಿಹಾರಗಳ ಸೂಚಿಸುವರು. "ಆದರೆ ಅದು ಯಾವ ಫಲದಾಯಕವಾಗುವುದು ಎಂದರೆ, ಇಂಡಿಯ ಬಡಜನತೆ ಒಗ್ಗಟ್ಟಾಗಿ ತಮ್ಮದೇ ಆದ ಒಂ

---

ಮೂಲ : ಡಿ. ಎಚ್. ಶ್ರೀಕಾಂತ್

ಅನು : ದೇವಯ್ಯ ಹರವೆ.

---

ಸಂವಿಧಾನವನ್ನು ರಚಿಸಿದಾಗ ಮಾತ್ರ. ಅವರು ತಾವು ಮೊದಲೇ ನಿರ್ಣಯಿಸಿಕೊ ರುವ ಯೋಜನೆಯನ್ನೂ (ಅಂಬೇಡ್ಕರ್ ರಾ ಸಮಾಜವಾದದಲ್ಲಿ ನಿಯೋಜಿಸಿರುವ ರ ಯಲ್ಲಿ) ಕಾರ್ಯರೂಪಕ್ಕೆ ತರುವರು. ಅಂತಿ ವಾಗಿ ಹೇಳುವುದಾದರೆ ರಾಜಕೀಯ ಮ

○ ○ ○

# ಪಾರಸ್‌ಬಿಘಾ : ಹಿಂದುಳಿದ ಬ

[ಒಂದನೇ ಪುಟದಿಂದ]

ಯಿಂದ ತಡವರಿಸಿ ಎದ್ದು ದಿಕ್ಕು ತೋಚದೆ ಬೆಂಕಿಯಿಂದ ತಪ್ಪಿಸಿಕೊಳ್ಳಲು ಹಾಗೂಹೀಗೂ ತಪ್ಪಿಸಿ ಹೊರಬರುವವರನ್ನು ಹೊರಗೆ ಕಾದಿದ್ದ ಗುಂಪು ಗುಂಡಿಟ್ಟು ಬೆಂಕಿಗೆ ಎಸೆಯುತ್ತಿತ್ತು.

12 ಮಂದಿ ಸಜೀವವಾಗಿ ಸುಟ್ಟುಹೋದವರಲ್ಲಿ ಆರು ಜನರು ಒಂದೇ ಕುಟುಂಬಕ್ಕೆ ಸೇರಿದವರು, ಉಳಿದ ಆರು ಮಂದಿಯಲ್ಲಿ ಮೂವರಂತೆ ಎರಡು ಕುಟುಂಬಗಳವರು, ಬೆಂಕಿಯುಂದ ಭಸ್ಮವಾದವರಲ್ಲಿ ಮಹಿಳೆಯರು, ಶಾಲೆಗೆ ಹೋಗುತ್ತಿದ್ದ ಮಕ್ಕಳು ಸೇರಿವೆ. ಸುಮಾರು 50 ದಾಟಿರುವ ಗಂಗಿ ಎಂಬ ವೃದ್ದೆ ಸುಟ್ಟ ಗಾಯಗಳಿಂದ ಈಗ ಜೆಹನಾಬಾದ್ ಆಸ್ಪತ್ರೆಯಲ್ಲಿದ್ದು ಪರಿಸ್ಥಿತಿ ಚಿಂತಾಜನಕವಾಗಿದೆ. ಅವಳ ಕಣ್ಣು ಇಂಗಿಹೋಗಿರುವುದರಿಂದ ಈಗ ಆಕೆ ತನ್ನ ಎರಡು ಗಂಡು, ಮಕ್ಕಳು, ಗಂಡ, ಮೈದ ಮತ್ತವನ ಹೆಂಡತಿ, ಮಗ ಬೆಂಕಿಗೆ ಆಹುತಿಯಾಗಿದ್ದರೂ ಕಣ್ಣೀರು ಹಾಕುವ ಸ್ಥಿತಿಯಲ್ಲೂ ಇಲ್ಲ. ಆದಾಗ್ಯೂ ಆಕೆಯ ಸಹೋದರನ ಶಾಲೆಗೆ ಹೋಗುವ ಮೂರು ಮಕ್ಕಳು ಗುಂಡೇಟಿನಿಂದ ತಪ್ಪಿಸಿಕೊಳ್ಳಲಾಗದಿದ್ದರೂ ಬದುಕುಳಿದಿವೆ.

ದಲಿತರ ಕಗ್ಗೊಲೆ ನಡೆಸಿ ಹಿಂತಿರುಗುವಾಗ ಸಶಸ್ತ್ರಧಾರಿಗಳ ಗುಂಪು ಗಹಗಹಿಸಿ ನಕ್ಕು "ಈ ಸಾರಿ ನಾವು ಸುಮ್ಮನೆ ನಾಟಕ ಮಾಡಿದ್ದೇವೆ ಮುಂದಿನ ಸಾರಿ ಸರಿಯಾಗಿ ಮಾಡ್ತೀವಿ" ಎಂದು ಕುಣಿದು ಕುಪ್ಪಳಿಸಿ ಜಯಸಾಧಿಸಿದವರಂತೆ ಓಡಿತು.

ಭೂವಿವಾದವೇ ಈ ಬೀಭತ್ಸ ಹತ್ಯಾಕಾಂಡಕ್ಕೆ ಉಗಮ. ಪಾರಿಸ್‌ಬಿಘಾ ಗ್ರಾಮದಲ್ಲಿ ಹೆಚ್ಚಾಗಿ ಗದೇರಿಯಾಸ್ ಎಂಬ ಕುರುಬಜಾತಿ, ನಾಲ್ಕು ಯಾದವ ಕುಟುಂಬಗಳು ಮತ್ತು ಕೆಲವು ದುಸಾಧಸ್ (ಹರಿಜನ) ಕುಟುಂಬಗಳು. ಎರಡು ಮುಸ್ಲಿಂ ಮತ್ತು ಒಂದು ಭೂಮಿಹಾರರ ಕುಟುಂಬಗಳಿವೆ. ಭೂಮಿಹಾರ ಕುಟುಂಬವೊಂದು ಮಾತ್ರ ತೊಟ್ಟಿ ಕಂಬದ ಬಾರಿದೊಡ್ಡ ಮನೆ ಹೊಂದಿದ್ದು ಶ್ರೀಮಂತಿಕೆಯಿಂದ ಕೂಡಿದೆ. ಉಳಿದ ಎಲ್ಲ ಜಾತಿಯವರು ಅಲ್ಪಸ್ವಲ್ಪ ಜಮೀನುಳ್ಳವರು, ಹೆಚ್ಚಾಗಿ ಕಡುಬಡತನದಲ್ಲಿರುವ ಭೂಹೀನರು. ಈ ಹತ್ಯಾಕಾಂಡಕ್ಕೆ ಈ ಹಿಂದೆ ಕೊಲೆಗೀಡಾದ ನಿರಂಜನ್‌ಸಿಂಗ್ ಭೂಮಿಹಾರ್ ಏಕೈಕ ಕುಟುಂ

ಬದ ಮುಖ್ಯಸ್ಥ. 27 ವರ್ಷಗಳ ಹಿಂದೆ ತ ಪಾರಸ್‌ಬಿಘಾಕ್ಕೆ ಬಂದು ನೆಲಸಿದ. ಆ ವಿವಾದದಲ್ಲಿದ್ದ ಸುಮಾರು 50 ಎಕರೆ ಜ ನನ್ನು ಕೊಂಡುಕೊಂಡ, ಈ ಮುಂಚೆ ಹತ್ತಿ ಪಂಡು ಎಂಬ ಗ್ರಾಮದ ಜಟ್ಟಿಸಿಂಗ್ ಕೊಂ ಕೊಂಡಿದ್ದ. ಈ ವಿವಾದಗ್ರಸ್ತ ಜಮೀನ ಗ್ರಾಮದ ಎಲ್ಲ ಭೂಹೀನರು ಪಾಲುಗಾ ಯಿಂದ ಸಾಗುವಳಿ ಮಾಡುತ್ತ ಬಂದಿದ್ದ ನಿರಂಜನ್‌ಸಿಂಗ್ ಈ ಜಮೀನನ್ನು ಕ್ರಯ ತೆಗೆದುಕೊಂಡ ನಂತರ ಭೂಹೀನ ಸಾಗು ದಾರರನ್ನು ಬಿಟ್ಟು ಓಡಿಸಿದ.

ನಿರಂಜನ್‌ಸಿಂಗ್‌ನ ಒಡೆತನ ಬಂದ ಕೂಡ ಈತನ ಮತ್ತು ಜಟ್ಟಿಸಿಂಗ್ ನಡುವೆ ವಾ ಆರಂಭವಾಯಿತು. ಪಾಲುಗಾರಿಕೆಯಿಂದ ಈಹಿ ಸಾಗುವಳಿ ಮಾಡುತ್ತಿದ್ದ ಭೂಹೀನರು ಜ ಸಿಂಗ್ ಬಗ್ಗೆ ಅನುಕಂಪವುಳ್ಳವರಾದರು. ದಿಂದಾಗಿ ತನ್ನ ಹಳ್ಳಿಗರ ಮೇಲೆ ನಿರಂಜ ಸಿಂಗ್‌ನಲ್ಲಿ ಹಗೆತನ ಹೆಚ್ಚಾಯಿತು.

ಈ ಎಲ್ಲಾ ಘಟನೆಗೆ ಮತ್ತೊಂದು ಕಾರಣ

## . ಅಂಬೇಡ್ಕರ್ ವಿಶ್ಲೇಷಣೆ

ಕ ಶಕ್ತಿಯನ್ನು ರೂಪಿಸಲು ಬಡವರ್ಗಕ್ಕೆ ಾವಣೆಗಳೇ ಮೂಲಾಧಾರ. ಆದರೆ ಲ್ಲಾ ಆಸೆ ಆಕ್ಷಾಂಕ್ಷೆಗಳನ್ನು ಗಾಳಿಯಲ್ಲಿ ಚುನಾವಣೆಗಳನ್ನು ಸುಮ್ಮನೆ ಕಳೆದುಕೊ ್ಲೇ ಹೋಗುತ್ತಿರುವರು." ಇದೊಂದು ರ್ಸ್ಪದವಾದ ವಿಷಯವಾಗಿರುವುದು. ಈ ವು ವೈಯಕ್ತಿಕ ಒಡೆತನವನ್ನು ತಡೆಯುವ ಗೂ ಸಾಮೂಹಿಕ ಒಡೆತನವನ್ನು ಎತ್ತಿಹಿಡಿ ವ ರಾಷ್ಟ್ರ-ಸಮಾಜದ ತಿರುಳೇ ಆಗಿದೆ. ರೆ ಯಾವ ಜಾತೀಯ ಸಮಾಜ ವೈಯಕ್ತಿಕ ತನದ ಬಗ್ಗೆ ತನ್ನ ಒಲವನ್ನು ತೋರು ೋ ಅದು ತನ್ನತತ್ವವನ್ನು ಬಿಟ್ಟುಕೊಟ್ಟು, ಮಾಜಿಕ-ಆರ್ಥಿಕ ಶೋಷಣೆಗಳನ್ನು ತಡೆಯ ಂಥ ಅಂಬೇಡ್ಕರ್ ಅವರ ತತ್ವವನ್ನು ಎತ್ತಿ ಡಿಯುವ ಸಾಧ್ಯತೆಯಾದರೂ ಕಡಿಮೆ ದೆ.

ರೆ ಇತಿಹಾಸದ ಅನೇಕ ಅನುಭವಗಳು ಸಾರಿ ಹೇಳುತ್ತವೆ ಏನೆಂದರೆ; ಬಡ ಸಮೂಹ ಹಡ ಶ್ರೇಯಸ್ಸಿಗಾಗಿ, ಅವರ ಸವಲತ್ತುಗಳ ಉನ್ನತಿಗಾಗಿ ಶ್ರೀಮಂತ ಆಳುವವರ್ಗ (ಯಾವುದೇ ಧರ್ಮವಾಗಲಿ) ತಮ್ಮ ಸಾಮರ್ಥ್ಯ ವನ್ನು ಒಪ್ಪಿಸಿಕೊಳ್ಳುವುದಿಲ್ಲ. ಅದಕ್ಕೆ ವಿರು ದ್ಧವಾಗಿ ಬಡಜನತೆಯನ್ನು ಯಾವ ರೀತಿಯಾಗಿ ಮತ್ತೂ ತುಳಿಯಬೇಕು ಹಾಗೂ ಬಡಜನತೆಯ ಚಳುವಳಿಗಳನ್ನು ಅಥವಾ ವರ್ಗಸಂಘರ್ಷಗ ಳನ್ನು ಯಾವ ರೀತಿಯಾಗಿ ಹತ್ತಿಕ್ಕಬೇಕೆಂಬು ದನ್ನು ಕುರಿತು ಯೋಚಿಸುತ್ತಿರುತ್ತದೆ,

ಅಂಬೇಡ್ಕರ್ ಮುಂದುವರಿದು ಈ ರೀತಿ ಪ್ರಚುರ ಪಡಿಸುವರು : 'ರಾಜಕೀಯ ಶಕ್ತಿಯೇ ಎಲ್ಲ ವಿಧ ವಾದ ಸಾಮಾಜಿಕ ಪ್ರಗತಿಗೆ ಕಾರಣವಾಗಿರು ತ್ತದೆ. ಅದನ್ನು ಸಾಧಿಸಬೇಕಾದರೆ ಎಲ್ಲಾ ಶಕ್ತಿವಂತರಾದಿರಬೇಕು ಅಥವಾ ಹಣವಂತರಾ

(6ನೇ ಪುಟ ನೋಡಿ)

## ನನ್ನದೊಂದು ಬಯಕೆ

ಸ್ವಾಮಿ
ನನ್ನದೊಂದು ಬಯಕೆ
ಈಡೇರುವ ಸಮಯ ಬಂದಿದೆಯಾದ್ದರಿಂದ
ಬಯಸುತ್ತಿದ್ದೇನೆ.
ಸ್ವಾಮಿ !
ನನ್ನದೊಂದು ಬಯಕೆ
ಅಂಥಾ ದೊಡ್ಡದೇನೂ ಅಲ್ಲ
ಸಣ್ಣದೇ ಬಹಳ ಸುಲಭವಾದದ್ದು
ಅದೇನೆಂದು
ಪ್ರಶ್ನಾರ್ಥಕವಾಗಿ ನೋಡುವಿಯಾ ?
ಹೇಳುತ್ತೇನೆ
ಕೇಳು, ಮತ್ತೇನೂ ಅಲ್ಲ
ಸಾವಿರಾರು ವರುಷಗಳಿಂದ
ನಿಮ್ಮಿಂದ
ಒದಿಸಿಕೊಂಡು ಒದಿಸಿಕೊಂಡು ಸಾಕಾಗಿದೆ
ಅದಕೆ.
ಒಂದು ಸಲ, ಒಂದೇ ಒಂದು ಸಲ,
ಏಳಲಿಕ್ಕೆ ಬರದ ಹಾಗೆ,
ನಿಮ್ಮ
ಕುಂಡಿ ಮೇಲೆ ರಫಾಡಿಸಿ,
ಕತ್ತೆಗೆ ಒದ್ದ ಹಾಗೆ,
ಒದೀಬೇಕೆಂದು ಆಸೆಯಾಗಿದೆ
ಅಷ್ಟೆ.

—ಬಾಬು ಬಂಡಾರಿಗಲ್

## ಹೀನರ ಭೀಕರ ಹತ್ಯಾಕಾಂಡ

. ಜಮೀನ್ದಾರಿ ಪದ್ಧತಿ ನಂತರ ಸರ್ಕಾ ಒಡೆತನಕ್ಕೆ ಬಂದ ಸಾಗುವಳಿ ಮಾಡದೆ ದ್ದ ಸುಮಾರು 19 ಎಕರೆ ಜಮೀನನ್ನು ಬಡ ಭೂಹೀನರು ಉತ್ತುಬಿತ್ತು ಬೆಳೆಯ ರಂಭಿಸಿದರು. ತಮ್ಮ ಗ್ರಾಮ ಠಾಣೆಗೆ ಈ ಮೀನು ಸೇರಿದುದು ಎಂದು ಗ್ರಾಮಸ್ಥರೆಲ್ಲ ರ್ಕಾರದಿಂದ ಇದನ್ನು ಕ್ರಯಿಸಿದರು. ಇದರ ುತ್ತುವರಿಯಾಗಿ ಸುಮಾರು 3 ಎಕರೆ ಭೂಮಿ ನ್ನು ರೆವಿನ್ಯೂ ದಾಖಲೆ ಪ್ರಕಾರವಾಗಿ ಈ ರನ್ನು ಬಿಟ್ಟುಹೋಗಿರುವ ಅಥವಾ ಸತ್ತು ೋಗಿರುವ ಮುಸ್ಲಿಂ ಒಬ್ಬನಿಗೆ ಸೇರಿದದು. ಜಮೀನನ್ನು ಬಡ ಗದೇರಿಯಾಸ್ (ಕುರು ರು) ರೈತರು ತಮ್ಮ ದನಕರುಗಳಿಗಾಗಿ ಹುಲ್ಲು ಳೆಸುತ್ತಿರುವರು. ಈ ಎರಡು ಜಮೀನನ್ನು ಪಟಾಯಿಸುವುದು ನಿರಂಜನ್‌ಸಿಂಗ್‌ನ ಸಂಚಾ ತ್ತು. ಈ ಹೊತ್ತಿಗಾಗಲೇನಿರಂಜನ್‌ಸಿಂಗ್ ಮತ್ತು ೂಹೀನರ ನಡುವೆ ಹೆಚ್ಚಿದ ದ್ವೇಷ ಘರ್ಷ ಯ ಘಟ್ಟ ಮುಟ್ಟಿತು. ಕಳೆದ ಅಕ್ಟೋಬರ್ ಲ್ಲಿ ಇಬ್ಬರು ಬಡ ಮುಸಾದ್ಸ್ (ಹರಿಜನರು) ಳ ಗುಡಿಸಲುಗಳಿಗೆ ನಿರಂಜನ್‌ಸಿಂಗ್ ಬೆಂಬ ಲಿಗರು ಬೆಂಕಿ ಇಟ್ಟರು. ಇದಾದ ನಂತರ ಕೆಲ ದಿನಗಳಲ್ಲಿ ನಿರಂಜನ್‌ಸಿಂಗ್ ಕೊಲೆಯಾದ. ಗದೇರಿಯಾಸ್ ಮತ್ತು ಯಾದವರು ನಿರಂಜನ್ ಸಿಂಗ್ ಬಗ್ಗೆ ಅಷ್ಟೇನೂ ಸ್ನೇಹದಿಂದಿರಲಿಲ್ಲವಾ ದ್ದರಿಂದ ಅವರೇ ಕೊಲೆಮಾಡಿದ್ದಾರೆಂದು ಆತನ ಕುಟುಂಬದವರು ಪೋಲೀಸ್‌ಗೆ ದೂರುಕೊಟ್ಟರು. ಸರ್ಕಾರ ಪಾರಸ್‌ಬಿಘಾಕ್ಕೆ ಕೂಡಲೇ ಸಶಸ್ತ್ರ ಪಡೆಯನ್ನು ಕಾವಲಾಕಿತು. ಲೋಕಸಭೆ ಚುನಾ ವಣೆಯಲ್ಲಿ ಸರ್ಕಾರ ತನ್ನ ಸಶಸ್ತ್ರ ಪಡೆಯನ್ನು ವಾಪಸ್ ಕರೆಸಿಕೊಂಡಿತು. ಹಿಂತಿರುಗಿದ ಸಶಸ್ತ್ರಪಡೆ ಮತ್ತೆ ಇತ್ತ ನೋಡಲಿಲ್ಲ. ಅಷ್ಟೇ ಅಲ್ಲ ಸರ್ಕಾರ ವಿವಾದಗ್ರಸ್ತ ಭೂಸಮಸ್ಯೆಯನ್ನು ಬಗೆಹರಿಸುವುದನ್ನಾಗಲಿ ಅಥವಾ ಭೂಹೀನರಿಗೆ ರಕ್ಷಣೆ ಕೊಡುವುದನ್ನಾಗಲಿ ಮಾಡಲಿಲ್ಲ.

ಈ ಪರಿಸ್ಥಿತಿಯ ಲಾಭ ಪಡೆದ ಬಿಹಾರದ ಸಚಿ ವರೊಬ್ಬರಿಗೆ ಭದ್ರತಾ ಸಿಬ್ಬಂದಿಯಲ್ಲಿ ಸಿ ಐ. ಡಿ. ಇನ್ಸ್‌ಪೆಕ್ಟರ್ ಆಗಿರುವ ನಿರಂಜನ್‌ಸಿಂಗ್‌ನ ಮಗ ಹೊರಗಿನಿಂದ ಬಾಡಿಗೆ ಗೂಂಡಾಗಳನ್ನು ಕರೆಸಿ ಬಡರೈತರ ಗುಡಿಸಲುಗಳಿಗೆ ರಾತ್ರೋ ರಾತ್ರಿ ಬೆಂಕಿಹಚ್ಚಿಸಿ ಬಡವರನ್ನು ಜೀವಸಹಿತ ಸುಡಿಸಿದ. ಈ ಹತ್ಯಾಕಾಂಡ ನಡೆಯುವ ಮುನ್ನ ಆತ ಸಣ್ಣ ಶಸ್ತ್ರ ಚಿಕಿತ್ಸೆಗೆಂದು ಪಟ್ನಾ ದಲ್ಲಿನ ನರ್ಸಿಂಗ್ ಹೋಂಗೆ ದಾಖಲಾಗಿದ್ದ. ಪಾರಸ್‌ಬಿಘಾ ಜೆಹನಾಬಾದ್‌ಗೆ ಕೇವಲ 6 ಕಿ. ಮೀ. ಮತ್ತು ಮುಖ್ಯ ದಾರಿಗೆ ಒಂದು ಕಿ. ಮೀ. ಸಮೀಪವಿದ್ದರೂ ಹತ್ಯಾಕಾಂಡ ನಡೆದು 17 ಗಂಟೆಯಾಗಿದ್ದರೂ ಬಿಹಾರ ಸರ್ಕಾರಕ್ಕೆ ಮುಟ್ಟಿರಲಿಲ್ಲ. ಮರುದಿನ ಅಂದರೆ ಫೆಬ್ರುವರಿ 7 ರಂದು ಈ ವಿಚಾರ ಪಟ್ನಾ ಮುಟ್ಟಿತು. ದಿಕ್ಕು ತೋಚದೆ ಹತ್ಯಾಕಾಂಡ ದಿಂದ ತಪ್ಪಿಸಿಕೊಂಡವರು ಬೆಂಕಿಗೆ ಸಿಕ್ಕಿ ಸತ್ತ ವರ ಕರುಕಲಾಗಿದ್ದ ಕಳೇಬರಹಗಳಮತ್ತು ಮನು ಷ್ಯರಂತೆ ಸಜೀವವಾದ ಎಮ್ಮೆ-ದನಕರುಗಳ ಮುಂದೆ ಗೋಳಿಡುತ್ತಿದ್ದರು.

ಸೌಜನ್ಯ : ಲಿಂಕ್

# ೧೫ ಮತ್ತು ೧೬ರಂದು ದೆಹಲಿಯಲ್ಲಿ ಪ್ಯಾಂಥರ್ಸ್ ಸಮ್ಮೇಳನ

ಈವರಗೆ ಕೇವಲ ಮಹಾರಾಷ್ಟ್ರಕ್ಕಿಷ್ಟೇ ತಮ್ಮ ಚಳವಳಿಯನ್ನು ಸೀಮಿತಗೊಳಿಸಿಕೊಂಡಿದ್ದ ದಲಿತ ಪ್ಯಾಂಥರ್ಸ್ ಮಾರ್ಚ್ 15 ಮತ್ತು 16ರಂದು ದೆಹಲಿಯಲ್ಲಿ ಸಮ್ಮೇಳನವೊಂದನ್ನು ನಡೆಸಿ ದೇಶಾದ್ಯಂತ ದಲಿತ ಚಳವಳಿ ಆರಂಭಿಸಲು ನಿರ್ಧರಿಸಿದ್ದಾರೆ.

ಈ ಸಮ್ಮೇಳನವನ್ನು ಡಾ॥ ಬಿ. ಆರ್. ಅಂಬೇಡ್ಕರ್ ಅವರ ವಿಧವಾ ಪತ್ನಿ ಮಹಿಸಾಹೇಬ್ ಅಂಬೇಡ್ಕರ್ ಅವರು ಉದ್ಘಾಟಿಸುವರು.

ಸಮ್ಮೇಳನಕ್ಕೆ ಅಮೆರಿಕದ ಬ್ಲಾಕ್ ಪ್ಯಾಂಥರ್ಸ್ ನಾಯಕರು ಮತ್ತು ಕರಿಯ ಮುಸ್ಲಿಂ ಹಾಗೂ ವಿಶ್ವ ಬಾಕ್ಸಿಂಗ್ ಚಾಂಪಿಯನ್ ಮಹಮದ್ ಅಲಿ ಅವರನ್ನು ಆಹ್ವಾನಿಸಲಾಗಿದೆ.

## ಭೂ ಆಕ್ರಮಣ

ಮಹಾರಾಷ್ಟ್ರ ದಲಿತ ಪ್ಯಾಂಥರ್ಸ್ ನೇತೃತ್ವದಲ್ಲಿ ಭೂಹೀನ ರೈತರು ಇತ್ತೀಚೆಗೆ ಯಾವತ್‌ಮಲ್ ಜಿಲ್ಲೆಯ ದ್ವಾರಕಾ ಸಬ್ ಡಿವಿಜನ್‌ನಲ್ಲಿ ಸರ್ಕಾರದ ಸುಮಾರು 2500 ಎಕರೆ ಜಮೀನನ್ನು ವಶಪಡಿಸಿಕೊಂಡಿದ್ದಾರೆ.

# ಮೈಸೂರ್ ಬ್ಯಾಂಕ್ ದಲಿತ ನೌಕರರ ಸಂಘ

ಸಂವಿಧಾನಬದ್ಧ ಕಾನೂನುಗಳನ್ನು ಉಲ್ಲಂಘಿಸಿ ದಲಿತರಿಗೆ ಬಡ್ತಿ ಮತ್ತು ನೇಮಕಾತಿ ಮತ್ತಿತರ ರೀತಿಯಲ್ಲಿ ಆಗುತ್ತಿರುವ ಅನ್ಯಾಯಗಳ ವಿರುದ್ಧ ಹೋರಾಟ ನಡೆಸಲು ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ದಲಿತ ನೌಕರರು ಇತ್ತೀಚೆಗೆ ಬೆಂಗಳೂರಿನಲ್ಲಿ ಸಭೆ ಸೇರಿ ಸಂಘವೊಂದನ್ನು ರಚಿಸಿಕೊಂಡಿದ್ದಾರೆ.

# ರಾಷ್ಟ್ರ ಸಮಾಜವಾದದ ಬಗ್ಗೆ ಡಾ. ಬಿ. ಆರ್. ಅಂಬೇಡ್ಕರ್ ಅವರ ವಿಶ್ಲೇಷಣೆ

[ಮಧ್ಯದ ಪುಟದಿಂದ]

ನಿರಬೇಕು ? ಆದಲ್ಲದೆ ದಲಿತ ಜನಾಂಗ ತಮ್ಮ ಮುಕ್ತಿಯನ್ನು ತಾವೇ ಕಂಡುಕೊಳ್ಳಬೇಕಾದರೆ, ತಾವುತಾವುಗಳೇ ಒಂದಾಗುವುದರ ಮುಖೇನ ರಾಜಕೀಯ ಶಕ್ತಿಯನ್ನು ವಶಪಡಿಸಿಕೊಳ್ಳಬೇಕು ಎಂದೂ ತಿಳಿಸುವರು.

ಆದರಿಂಡ ಅತಿ ತುರ್ತಾದ ಹಾಗೂ ಮುಖ್ಯವಾದ ರಾಜಕೀಯವಾದ ಒಂದು ಗುರಿಯೆಂದರೆ ಬಡಜನತೆ ಹಾಗೂ ನಿರ್ದಿಷ್ಟವಾಗಿ ದಲಿತ ಜನಾಂಗ ಒಂದಾಗಬೇಕು ಆ ಮುಖೇನ ಆಳುವ ವರ್ಗದಿಂದ ರಾಷ್ಟ್ರ ಶಕ್ತಿಯನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳಬೇಕು. ನಂತರವೇ ತಮ್ಮ ಪೂರ್ಣ ನಿಯೋಜಿತವಾದ ಸಾಮಾಜಿಕ-ಆರ್ಥಿಕ ಯೋಜನೆಯನ್ನು ಅತ್ಯಂತ ಸಮರ್ಥವಾಗಿ ರೂಪಿಸಿಕೊಳ್ಳಬೇಕಾಗುವುದು.

ಆದೇ ಸಮಯದಲ್ಲಿ ಸಮಾಜವಾದಿ ಬುದ್ಧನ ಬೋಧನೆಯಾದ 'ಬಹಾಜನ್ ಹಿತಾಯ ಬಹೂಜನ್ ಸುಖಾಯ' ಎಂಬ ತತ್ವವನ್ನು ಜನತೆಯಲ್ಲಿ ಬೇರೂರಿಸಬೇಕು. ಇದರಿಂದ ಜನತೆ ಜಾತೀಯ ಭಾವನೆಯಿಂದ ದೂರವಿರಲು ಸಾಧ್ಯವಾಗುವುದು. ಇಂಥ ಸಮಾಜದಲ್ಲಿ ಮಾತ್ರ ಬಡಜನತೆ ಮೂಲಭೂತ ಹಕ್ಕುಗಳನ್ನು—ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ—ಮುಂತಾದವುಗಳನ್ನು ಅವುಗಳ ಮೂಲ ಸ್ವರೂಪದೊಂದಿಗೆ ಅನುಭವಿಸಲು ಸಾಧ್ಯವಾಗುವುದು.

ಅಂಬೇಡ್ಕರ್ ಅವರು ಭವಿಷ್ಯದ ಮುನ್ನೆಚ್ಚರಿಕೆಯೊಂದನ್ನು ನುಡಿಯುತ್ತಾರೆ. ಉದಾಹರಣೆಗೆ— ರಾಜಕೀಯ ಶಕ್ತಿ ಕೆಲವೊಂದು ಜನಗಳ ಗುತ್ತಿಗೆಯಾಗಿ ಬಿಡಬಹುದು. ಈ ರೀತಿಯ ಗುತ್ತೆದಾರಿಕೆಯು ಕೆಳವರ್ಗದ ಜನರ ಶ್ರೆಯೋಭಿವೃದ್ಧಿಯನ್ನು ಹಾಳುಮಾಡುವಂಥದ್ದಾಗಿರುವುದು... ತಮ್ಮನ್ನು ತಾವು ಆಳಿಕೊಳ್ಳುವುದನ್ನು ಈ ಗುತ್ತೆದಾರರು ಸಹಿಸಿಕೊಳ್ಳುವುದಿಲ್ಲ. ಇದು ಕೆಳವರ್ಗದ ಜನ ತಮ್ಮನ್ನು ತಾವು ಕಂಡುಕೊಳ್ಳುವುದಕ್ಕೆ ಉತ್ತಮವಾದ ಅವಕಾಶ, ಆದರೂ ವರ್ಗ ಸಂಘರ್ಷ ಅಥವಾ ವರ್ಗಕಲಹಗಳತ್ತ ಬಡ ಜನತೆ ಸಾಗಲೂ ಈ ಗುತ್ತೇದಾರರು ಬಿಡುವುದಿಲ್ಲ. ಈ ದೃಷ್ಟಿಯಿಂದ ಕೆಳವರ್ಗದ ಜನರ ಆಶೋತ್ತರಗಳನ್ನು ಗಮನದಲ್ಲಿಟ್ಟುಕೊಂಡು ಮುನ್ನಡೆಯಿಸುವುದು ಸ್ವತಂತ್ರ ಇಂಡಿಯಾದ ಕರ್ತವ್ಯವಾಗಬೇಕು

“...ನಾವುಗಳು ಸಾಮಾಜಿಕ ಆರ್ಥಿಕ ದ್ವಂದ್ವಗಳನ್ನು ಈ ರೀತಿಯ ಚಳುವಳಿಯ ಮೊದಲ ಹಂತದಲ್ಲಿ ತೊಡೆದು ಹಾಕಬೇಕಾಗುವುದು. ಇಲ್ಲದೆ ಹೋದರೆ ರಾಜಕೀಯ ಪ್ರಜಾಪ್ರಭುತ್ವ ಇದರಿಂದ ಬಹಳ ತೊಂದರೆಯನ್ನು ಎದುರಿಸಬೇಕಾಗುವುದು...”

“ನಾನು ಈ ಸಂವಿಧಾನವನ್ನು ರಚಿಸಿದರೂ, ಇದರಿಂದ ನನಗೆ ತೃಪ್ತಿಯೇನೋ ದೊರೆತಿಲ್ಲ... ನಿಜವಾದ ಬಡವರು ಸಮಾಜದ ಇತರೆ ವರ್ಗದ ಜನರ ಸಮಕ್ಕ ಬರದೇ ಹೋದರೆ, ಈ ಹಸಿದ ಹೊಟ್ಟೆಯ ಜನ ಈ ಸಂವಿಧಾನವನ್ನು ಸುಟ್ಟು ಹಾಕುವರು ಹಾಗು ದಂಗೆ ಏಳುವರು ಎಂಬುವ ನಂಬಿಕೆ ನನಗಿದೆ.” ಎಂಬುವ ಮಾತುಗಳನ್ನು ಆಧಾರವಾಗಿಟ್ಟುಕೊಂಡು ತೊಂದರೆಗೊಳಗಾದವರೆಲ್ಲಾ ಒಗ್ಗಟ್ಟಾಗಿ ಕ್ರಾಂತಿಕಾರಿ ಹೋರಾಟವನ್ನು ಆರಂಭಿಸಬೇಕು. ಆ ಮುಖೇನ ಬಡವ ಬಲ್ಲಿದರಲ್ಲಿರುವ ಅಂತರವನ್ನು ಕಡಿಮೆ ಮಾಡಬೇಕಲ್ಲದೆ ತಮ್ಮಗಳ ಹಕ್ಕುಗಳನ್ನು ಉಳಿಸಬೇಕಾಗಿದೆ. ಇಂಥ ಸಂದರ್ಭದಲ್ಲಿ ತುಳಿಯುವ ವರ್ಗದ ಜನ ಚಳುವಳಿಗಳನ್ನು ತಡೆಯುವುದಕ್ಕೆ ಶಾಂತಿಯುತವಾದ ಸಂಧಾನಗಳನ್ನು ನಡೆಸಬಹುದು, ಅಥವಾ ಅಗತ್ಯವಿದ್ದರೆ ಹಿಂಸಾ ಮಾರ್ಗವನ್ನು ಅನುಸರಿಸಬಹುದು. ಶಾಂತಿಯನ್ನು ಕಾಪಾಡುವ ನೆಪದಲ್ಲಿ ಆಳುವ ಸರ್ಕಾರ ತನ್ನ ಮಿಲಿಟರಿ, ಪೋಲೀಸ್ ಮುಖಾಂತರ ಹಿಂಸಾಚಾರವನ್ನೇ ನಡೆಯಿಸಿ ಚಳುವಳಿ ತಡೆಯಲು ಪ್ರಯತ್ನಿಸಬಹುದು. ಆದರೆ ಇದಕ್ಕೆ ಉತ್ತರವಾಗಿ ಚಳುವಳಿ ಮಾಡುವ ಜನರೂ ಹಿಂಸಾಮಾರ್ಗವನ್ನು ಅನುಸರಿಸಬೇಕೋ ಬೇಡವೋ ಎಂಬುದು ಇವರು ವಿಮೋಚನೆ ಆಗಬೇಕೋ ಬೇಡವೋ ಎಂಬುದನ್ನು ಅವಲಂಬಿಸಿರುವುದು.

ಆದರಿಂದ ಅಂಬೇಡ್ಕರ್ ಕೊಟ್ಟಂಥ ಘೋಷಣೆ ವಿದ್ಯಾವಂತರಾಗಬೇಕು (ರಾಜಕೀಯವಾಗಿ), ಒಗ್ಗಟ್ಟಾಗಬೇಕು, ದಂಗೆ ಏಳಬೇಕು — ಆ ಮುಖೇನ ಹಳೆಯ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಹೊಸದಾಗಿ ರೂಪಿಸಬೇಕು. ಹೀಗೆ ಎರಡೂ ಕಡೆಯಿಂದಲೂ ತುಳಿಯುವಂಥ ಗತಾನುಗತಿಕವಾದ ಇಂಡಿಯಾದ ಪ್ರಜ್ಞೆಗೆ ಸವಾಲಾಗಿ ನಿಲ್ಲಬೇಕು.

(ಮುಗಿಯಿತು)

Statement about ownership and other particulars about News-aper PANCHAMA, to be published in the first issue every year fter the last day of February.

**FORM IV**

| | | |
|---|---|---|
| 1. | Title of Newspaper | PANCHAMA |
| 2. | Registration Number of the Newspaper | R. N. 29681/76 |
| 3. | Language/Languages in which it is published | Kannada |
| 4. | Periodicity of its publication and the day/days/dates on which it is published | Fortnightly |
| 5. | Retail price of the Newspaper | 20 paise |
| 6. | Publisher's Name | Sri. H. Govindaiah |
| | Nationality | Indian |
| | Address of the owners | 5-A, Vani Institute of Commerce Journalist Colony BANGALORE-560002. |
| 7. | Printer's Name | D. S. Chakrapani |
| | Nationality | Indian |
| | Address | Nutan Printing, Publishing & Training Centre, 405, Sampige Road, Malleswaram, BANGALORE-560003. |
| 8. | Editor's Name | Sri Ramadeva Rake |
| | Nationality | Indian |
| | Address | 5-A, Vani Institute of Commerce Journalist, Colony, BANGALORE-560002. |
| 9. | True and precise account of the premises where the Printing is conducted | Nutan Printing, Publishing & Training Centre 405, Sampige, Road, Malleswaram, BANGALORE-560003. |
| 10. | Owner's Names | 1) H. Govindaiah 2) Ramadeva Rake 3) Shivaji Ganeshan 4) Shivamalla Devanur 5) Indudhara Honnapura |
| 10. | Place of Publication | BANGALORE-560002 |

I H. GOVINDAIAH, hereby declare that the particulars given above are true to the best of my knowledge and belief.

H. GOVINDAIAH
Signature of Publisher

Bangalore
25-2-80

# ಚಿಂತಾಮಣಿ ತಾಲ್ಲೂಕು ಕೂಲಿಗೆ ನಿರಾಕರಿಸಿದ ದಲಿತನ ಮೇಲೆ ದೌರ್ಜನ್ಯ

ದಲಿತ ಯುವಕ ವೆಂಕಟರಾಯಪ್ಪ ಎಂಬಾತ ಹುಷಾರಿಲ್ಲದ ಕಾರಣ ಕೂಲಿಗೆ ಬರಲು ನಿರಾಕರಿಸಿದ್ದಕ್ಕಾಗಿ ಚಿಂತಾಮಣಿ ತಾಲ್ಲೂಕು ನಾಯುಕನಹಳ್ಳಿಯ ದಲಿತರಿಗೆ ಅಲ್ಲಿನ ಭೂಮಾಲೀಕ ರೆಡ್ಡಿಗಳು ಸಾಮಾಜಿಕ ಬಹಿಷ್ಕಾರ ಹಾಕಿದ್ದಾರೆ.

"ಇವ್ರ್ನ ಇಂಬೇ ಬಿಡುಬಾರ್ದ್ದು, ಕೈಕಾಲು ಮುರ್ದ್ದು ಹದ್‌ಬಸ್ತ್‌ನಲ್ಲಿಟ್ಕೊಬೇಕು" ಎಂದು ಗುಂಪು ನಿರ್ಧಾರ ತೆಗೆದುಕೊಂಡ ನಂತರ ಫೆಬ್ರುವರಿ 23 ರಂದು ಸುಮಾರು 9-30 ಗಂಟೆಯಲ್ಲಿ ದಲಿತರ ಕೇರಿ ಮೇಲೆ ದಾಳಿ ಎಸಗಿ ವೆಂಕಟರಾಯಪ್ಪನನ್ನು ಚೆನ್ನಾಗಿ ಹೊಡೆದಿದ್ದಾರೆ.

ಪಂಚಾಯುತಿ ಅಧ್ಯಕ್ಷ ಸುಬ್ಬರೆಡ್ಡಿ, ಪಟೇಲ್ ನಾರಾಯಣರೆಡ್ಡಿ, ಸಂಜೀವರೆಡ್ಡಿ, ಅಶ್ವತ್ಥರೆಡ್ಡಿ, ತಿಮ್ಮಾರೆಡ್ಡಿ ಮತ್ತು ವೆಂಕಟರೆಡ್ಡಿ ಇವರೇ ಮುಂತಾದ ದುಷ್ಕರ್ಮಿಗಳು ದಲಿತರ ಕೇರಿ ಮೇಲೆ ಹಲ್ಲೆ ನಡೆಸಿದವರು.

ಮರುದಿನ ಈ ಹಲ್ಲೆಕೋರರೆಲ್ಲ ಸಭೆಸೇರಿ ದಲಿತರಿಗೆ ಅಂಗಡಿಗಳಲ್ಲಿ ಸಾಮಾನುಗಳನ್ನು ನೀಡದಂತೆ ಮತ್ತು ಕೂಲಿಗೆ ಕರೆಯದಂತೆ ಹಾಗೂ ಬಾವಿಗಳಲ್ಲಿ ನೀರು ತೆಗೆಯದಂತೆ ಸಾಮಾಜಿಕ ಬಹಿಷ್ಕಾರ ಹಾಕಿದ್ದಾರೆ.

## ಪ್ರತಿಭಟನಾ ಪ್ರದರ್ಶನ

ಬೆಂಗಳೂರಿನ ಯೂನಿಟಿ ಬಿಲ್ಡಿಂಗ್‌ನಲ್ಲಿರುವ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಛೇರಿ ಮುಂದೆ ವಿವಿಧ ಕಚೇರಿಗಳ ದಲಿತವರ್ಗದ ನೌಕರರು ಫೆಬ್ರುವರಿ 13 ರಂದು ಪ್ರತಿಭಟನೆ ನಡೆಸಿದರು.

ಸಂವಿಧಾನಬದ್ಧ ಮೀಸಲಾತಿ ಮತ್ತು ದಲಿತ ವರ್ಗಗಳ ನೌಕರರಿಗೆ ಬಡ್ತಿ ಜಾರಿಗೊಳಿಸಬೇಕೆಂದು ಕೇಳಲು ಹೋದ ನೌಕರರಿಗೆ ಜನರಲ್ ಇನ್ಶೂರೆನ್ಸ್ ಆಡಳಿತವರ್ಗ ನಿರಂತರವಾಗಿ ಕೊಡುತ್ತಿರುವ ಹಿಂಸೆ, ಕಿರುಕುಳವನ್ನು ವಿರೋಧಿಸಿ ಕರ್ನಾಟಕ ಹರಿಜನ ಮತ್ತು ಗಿರಿಜನ ವಿಮಾನೌಕರರ ಸಂಘದ ನೇತೃತ್ವದಲ್ಲಿ ರಾಷ್ಟ್ರೀಕೃತ ಜನರಲ್ ವಿಮಾ ಕಾರ್ಪೊರೇಷನ್, ಜೀವವಿಮಾ ಕಾರ್ಪೊರೇಷನ್ ಬಿ.ಇ.ಎಂ.ಎಲ್. ಮತ್ತು ರಾಷ್ಟ್ರೀಕೃತ ಬ್ಯಾಂಕುಗಳ ದಲಿತ ನೌಕರರು ಪ್ರದರ್ಶನ ನಡೆಸಿದರು.

KRNB 364 Panchama Fortnightly 5, March 1980 Regd. No. 29681/76

# ನಿರಂತರ ಸಾವಿನ ಬಾಳಿಗೆ ಕೊನೆ ಹೇಳೋಣ

ಪ್ರೀತಿಯ ಒಡನಾಡಿ ದಲಿತರೆ, ನಿಮ್ಮೊಡನೆ ನೇರವಾಗಿ ನಾಕು ಮಾತಗಳನ್ನಾಡುವಂತೆ ಪರಿಸ್ಥಿತಿಯೇ ಒತ್ತಾಯಿಸಿದೆ ಬೆಲ್ಚಿಯ ಅಮಾನವೀಯ ಕಗ್ಗೊಲೆ ನೆನಪು ಇನ್ನೂ ನಮ್ಮ ತಲೆಯೊಳಗೆ ಹಸಿ ಹಸಿಯಾಗೇ ಇರುವಾಗಲೇ ಮತ್ತೆ ಪಾರಸ್ ಬಿಘಾ ಮತ್ತು ಘೋರ ಬೀಭತ್ಸ ಪಿಪ್ರಾ ಹತ್ಯಾಕಾಂಡಗಳು ನಮ್ಮನ್ನು ಮತ್ತಷ್ಟು ದುಃಖಕ್ಕೀಡು ಮಾಡಿ ಕಿಚ್ಚೆಬ್ಬಿಸಿವೆ ಬಿಹಾರದಲ್ಲಿ ನಮ್ಮವರ ಅಳಿವು-ಉಳಿವಿನ ಕಾಲವೀಗ ನಿರ್ಣಾಯಕ ಘಟ್ಟ ಮುಟ್ಟಿದೆ. ಭೂ ಮಾಲೀಕರ ಬಂದೂಕುಗಳು ದಲಿತರ ಬೆನ್ನತ್ತಿವೆ. ಇದು ಬಿಹಾರಕ್ಕೆ ಮಾತ್ರ ಸೀಮಿತವಾಗಿಲ್ಲ. ದೇಶದ ಒಂದಿಲ್ಲೊಂದು ಕಡೆ




ದಲಿತರ ಸಜೀವ ದಹನ, ಕಗ್ಗೊಲೆಗಳು ಎಡಬಿಡದೆ ನಿರಂತರವಾಗಿ ನಡೆಯುತ್ತಿವೆ. ಹೀಗಾಗಿ ನಮ್ಮದು ಯಾವಾಗಲೂ ಸತ್ತ ಮನೆಯ ಬಾಳಾಗಿದೆ. ಅದಕ್ಕೀಗ ಕೊನೆ ಹೇಳಲು ತುರ್ತಾಗಿ ಸಜ್ಜಾಗಬೇಕಾಗಿದೆ. ಇಲ್ಲದಿದ್ದರೆ ನಮ್ಮ ಸರದಿ ಎಂತೋ ಏನೋ ?

ನಮ್ಮ ಈ ನಿರಂತರ ಸಾವಿನ ಬಾಳಿಗೆ ಈ ಸಮಾಜದಲ್ಲಿನ ಅಸಮತೆ ಕಾರಣವಲ್ಲದೆ ಮತ್ತೇನು ಅಲ್ಲ. ಭೂಮಿ, ಸಂಪತ್ತು ಸ್ವಾತಂತ್ರ್ಯಗಳಿಂದ ನಮ್ಮನ್ನು ಶತಶತಮಾನಗಳಿಂದ ವಂಚಿಸಿಕೊಂಡು ಬರಲಾಗುತ್ತಿದೆ. ಹಗಲೆನ್ನದೆ-ಇರುಳೆನ್ನದೆ ದುಡಿದು ಬೆಳೆ ತೆಗೆಯುವ ನಾವೇ ನಮ್ಮ ಮಕ್ಕಳ ಹಸಿವಿನ ಗೋಳನ್ನು ಕೇಳಬೇಕಾಗಿದೆ. ದುಡಿಯುವ ಕೈಗಳಿಗೆ ಅನ್ನವಿಲ್ಲವಾಗಿದೆ.

ಪ್ರಜಾಪ್ರಭುತ್ವದ ಹೆಸರಿನಲ್ಲಿ ಆಳುತ್ತಿರುವವರೆಲ್ಲ ಭೂಮಾಲೀಕರು, ಬಂಡವಾಳಗಾರರು ಮತ್ತು ಬಂಡವಾಳವಾದಿಗಳೇ ಆಗಿರುವರು. ಹಾಗಾಗಿ ನಮ್ಮ ಮೂಲಭೂತ ಅಗತ್ಯತೆಗಳನ್ನು ಅರ್ಥ ಮಾಡಿಕೊಳ್ಳಲು-ಈಡೇರಿಸಲು ಮತ್ತು ರಕ್ಷಣೆ ಕೊಡಲು ವಿಫಲರಾಗಿ ತಮ್ಮ ವರ್ಗಗಳ ಹಿತಾಸಕ್ತಿಗಾಗಿ ನೂರಾರು ಎಕರೆ ಭೂಮಿ ಮತ್ತು ಬಂದೂಕುಗಳನ್ನು ನೀಡಿರುವರು. ಆ ಭೂಮಿ-ಬಂದೂಕಗಳೇ ಈಗ ಬೆಲ್ಚಿ ಮತ್ತು ಪಿಪ್ರಾ ದಲಿತರನ್ನು ಬಲಿ ತೆಗೆದುಕೊಂಡಿರುವುದು.

'ಕಿಲ್ವಮಣಿ' ಮತ್ತು 'ಬೆಲ್ಚಿ' ಹತ್ಯಾಕಾಂಡಗಳಿಂದ ನಾವು ಇದುವರೆಗೂ ಯಾವ ಪಾಠಕಲಿತಂತಿಲ್ಲ. ಬಹುಶಃ ಕಲಿತಿದ್ದರೆ ಪಿಪ್ರಾ ದುರಂತ ಸಂಭವಿಸುತ್ತಿರಲಿಲ್ಲವೇನೋ? ಪಿಪ್ರಾ ಘಟನೆಯಂತು ಕರುಣಾಜನಕವಾಗಿದೆ. ಕೋಟಿಗಟ್ಟಲೆ ಇರುವ ದಲಿತರ ಜಂಘಾಬಲವನ್ನೇ ಅಲುಗಾಡಿಸಿದೆ. ಎರಡು ವರ್ಷ ಹಸುಳೆಯನ್ನು ಗುಂಡಿಕ್ಕಿ ಬೆಂಕಿಗೆ ಎಸೆಯಲಾದಿದೆ. ಕೇವಲ 30 ಕುಟುಂಬಗಳಿರುವ ದಲಿತರು ಶಸ್ತ್ರ ಸಜ್ಜಿತ 500 ಮಂದಿ ಯುವದೂತ ಭೂಮಾಲೀಕರ ವಿರುದ್ಧ ಇಡೀ ರಾತ್ರಿ ಸುಮಾರು 6 ಗಂಟೆ ಕಾಲ ಎದೆಗಾರಿಕೆಯಿಂದ ಸಾವು ಬದುಕಿನ ನಡುವೆ ಸೆಣಸಾಡಿ ಕೊನೆಗೂ 14 ಮಂದಿ ಕಳೆದುಕೊಂಡಿರುವರು.

ಈ ಕ್ರೂರ ಹೇಯ ಸಮಾಜ ಉಳಿಸಿ ಬೆಳಸಿಕೊಂಡು ಬರುತ್ತಿರುವ ಭೂಮಾಲೀಕರ ಅಮಾನುಷ ಹಿಂಸೆ-ದೌರ್ಜನ್ಯದಿಂದ ನಮ್ಮ ಜೋಪಡಿಗಳೇ ನಮ್ಮ ಸ್ಮಶಾನವಾಗುತ್ತಿವೆ. ನ್ಯಾಯಬದ್ಧ ಕೂಲಿ ಕೇಳಿದ ಪ್ರತಿಫಲವಿದು, ಸರ್ಕಾರವಂತು ನಮ್ಮ ಪರ ಎಂದೂ ಇದ್ದಂತಿಲ್ಲ. ದಿನನಿತ್ಯ ನಮ್ಮ ಉದ್ಧಾರದ ಬಗ್ಗೆ ಬಾಯುಪಚಾರದ ಮಾತುಗಳನ್ನಾಡುವ ಅದು ದುಡಿಯುವ ಕೈಗಳಿಗೆ ಭೂಮಿ ಕೊಟ್ಟಿದ್ದರೆ ಹೀಗೆಕಾಗುತಿತ್ತು ? ಇತಿಹಾಸದುದ್ದಕ್ಕೂ ನಮ್ಮವರನ್ನು ಕೊಂದ ಅಪರಾಧಿಗಳಿಗೆ ಎಂದಾದರು ಮರಣದಂಡನೆಯಾಗಲಿ ಅಥವಾ ಸಾಮಾನ್ಯ ಶಿಕ್ಷೆಯನ್ನಾಗಲಿ ಕೊಟ್ಟಿದೆಯೆ? ಅದೇ ಬಿಹಾರದಲ್ಲಿ ಶೋಷಕ ಭೂಮಾಲೀಕರ ವಿದ್ಧರು ಹೋರಾಡಿದ ಆರುಮಂದಿ ದಲಿತರನ್ನು ಕೆಲವು ತಿಂಗಳ ಹಿಂದೆ ತಾನೆ ಬಾಗಲ್ಪುರ ಸೆಂಟ್ರಲ್ ಜೈಲಿನಲ್ಲಿ ಗಲ್ಲಿಗೇರಿಸಲಾಯಿತು. ಈ ಅಕೃತ್ಯ ಇಂಡಿಯಾದಲ್ಲಿ ಸ್ವಾತಂತ್ರ್ಯ, ಸಮಾನತೆ, ನ್ಯಾಯ ಮತ್ತು ಭ್ರಾತೃತ್ವ ಎಲ್ಲವೂ ಸತ್ತಿವೆ.

ಮತ್ತೆ ಶೋಷಣೆಗೆ ಒಳಗಾದವರ ಉದ್ಧಾರಕ್ಕಾಗೇ ಹುಟ್ಟಿಕೊಂಡ ಸಮಾಜವಾದ, ಸದುತಾವಾದಗಳ ಸಂಘಟನೆ ? ಹೋರಾಟಗಳೆಲ್ಲ ನಮ್ಮನ್ನು ಯಾವ ವರ್ಗಗಳು ಈವರೆಗೆ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ತುಳಿಯುತ್ತಿವೆಯೋ ಅಂತಹ ವರ್ಗಗಳಿಂದಲೇ ಬಂದ ನಮ್ಮಗಳ ನೋವನ್ನರಿಯದ ಬಹುತೇಕ ಮಂದಿಗಳ ಕೈಯಲ್ಲಿ ಸಿಕ್ಕಿಕೊಂಡಿವೆ. ಹೀಗಾಗಿ ಅವುಗಳ ಸಾಚಾತನ ಮತ್ತು ಕಾರ್ಯಗಳನ್ನು ಪ್ರಶ್ನಿಸುವ, ಗೇಲಿ ಮಾಡುವ ದುರಂತ ಪ್ರಶ್ನೆಗಳು ನಮ್ಮ ಮುಂದಿವೆ.

ಈ ಅಮಾನವೀಯ ವ್ಯವಸ್ಥೆಯ ಆಡಳಿತದ ಪಾಲುಗಾರಿಕೆಯಿಂದಂತಲೂ ನಮ್ಮ ಉದ್ಧಾರ ಸುಳ್ಳು ಎಂಬುದು ಈಗಾಗಲೇ ಸಿದ್ಧಿತವಾಗಿದೆ. ಬಿಹಾರದವರೇ ಆದ ಪ್ರತಿಷ್ಠಿತನಾಯಕ ಜಗಜೀವನರಾಂ ಇದ್ದಾಗ್ಯೂ ಮತ್ತು ಆ ರಾಜ್ಯಕ್ಕೆ ದಲಿತರೇ ಆದ ಭೋಲಾಪಾಸ್ವಾನ್ ಶಾಸ್ತ್ರಿ, ರಾಂಸುಂದರ್‌ದಾಸ್ ಮುಖ್ಯ ಮಂತ್ರಿಗಳಾಗಿ ಹೋದರು. ಆದರೂ ಅಲ್ಲಿನ ದಲಿತರ ಜೀವಕ್ಕೆ ಎಳ್ಳಷ್ಟೂ ಅಪಾಯತಪ್ಪಿಲ್ಲ. ಜೀವ ಹಿಡಿದು ದಿನಗಳನ್ನು ತಳ್ಳುತಿದ್ದಾರೆ. ಎಂದು-ಎತ್ತಕಡೆಯಿಂದ ಬೆಂಕಿ-ಗುಂಡು ಬೀಳುವುದೋ ಎಂದು ಭಯಗ್ರಸ್ತರಾಗಿ ಕಣ್ಣಲ್ಲಿ ನೀರು ತುಂಬಿಕೊಂಡಿರುವ ಅವರ ಅರಣ್ಯ ರೋಧನವನ್ನು ಕೇಳುವವರ್ಯಾರು! ಆದ್ದರಿಂದ ಈಗಿನ ಸರ್ಕಾರಗಳಾಗಲಿ ಅಥವಾ ಯಾರೋ ನಮ್ಮನ್ನು ಉದ್ಧಾರ ಮಾಡುವವರು-ಕಾಪಾಡುವವರು ಇದ್ದಾರೆಂದು ಭ್ರಮಿಸಿ ಕೂರುವುದರಲ್ಲಿ ಅರ್ಥವಿಲ್ಲ. ನಮ್ಮದು ಹೋರಾಟದ ಬದುಕು. ಅದಕ್ಕಾಗಿ ನಾವು ಹಿಂಜರಿಯುವ ಅಗತ್ಯವಿಲ್ಲ. ಹೋರಾಟದಿಂದಲೇ ಬದಲಾವಣೆ ಎಂಬುದನ್ನು ಅನೇಕ ರಾಷ್ಟ್ರಗಳಲ್ಲಿ ಆಗಿರುವ ಹೋರಾಟಗಳು ಮಾರ್ಗದರ್ಶಕವಾಗಿವೆ. ಆದ್ದರಿಂದ ನಮ್ಮೆಲ್ಲರ, ಇಡೀ ಶೋಷಿತರ ವಿಮೋಚನೆಗಾಗಿ ಕ್ರಾಂತಿಕಾರಿ ಸಂಘಟನೆಯಲ್ಲಿ ನಮ್ಮ ನೆಲೆಯನ್ನು ಗುರುತಿಸಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ನಮ್ಮ ನಮ್ಮ ಊರುಗಳು ಎಂದು ಬೆಲ್ಚಿ, ಪಿಪ್ರಾಗಳಾಗುತ್ತವೋ ಹೇಳಲಾಗದು.

—ಅಮಾಸ

Published by H. Govindaiah Printed at Nutan Printing press Bangalore-3. Editor: Ramadeva Rake, 5-A Vani Institute of Commerce, Journalist Colony, Bangalore-560002.